## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 479 |
| ಮಾನ್ಯ ಸದಸ್ಯರ ಹೆಸರು | ಶ್ರೀ ಪ್ರಕಾಶ್ ಕೆ ರಾಥೋಡ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |
| ಉತ್ತರಿಸಬೇಕಾದ ದಿನಾಂಕ | 24-09-2020 |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯದಲ್ಲಿ ಮದ್ಯ ಮಾರಾಟ ಮಳಿಗೆಯನ್ನು ಹೊಸದಾಗಿ ಆರಂಭಿಸುವ ಯೋಜನೆ ಸರ್ಕಾರದ ಮುಂದಿದೆಯೇ: (ವಿವರ ನೀಡುವುದು) | ಕರ್ನಾಟಕ ರಾಜ್ಯದಲ್ಲಿ ಸಿಎಲ್-2 ಮದ್ಯದಂಗಡಿ ಮತ್ತು ಸಿಎಲ್-9 ಬಾರ್ & ರೆಸ್ಟೋರೆಂಟ್ ಮದ್ಯ ಮಾರಾಟ ಮಳಿಗೆಯನ್ನು ಹೊಸದಾಗಿ ಆರಂಭಿಸುವ ಯೋಜನೆ ಸರ್ಕಾರದ ಮುಂದೆ ಇರುವುದಿಲ್ಲ |
| ಆ) | ಇದ್ದಲ್ಲಿ ಯಾವ ಆಧಾರದ ಮೇಲೆ ಮದ್ಯದಂಗಡಿಗಳು ಮತ್ತು ಎಂಎಸ್ಐಎಲ್ ಆರಂಭಿಸಲಾಗುವುದು: (ವಿವರ ನೀಡುವುದು) | ಎಂ.ಎಸ್.ಐ.ಎಲ್ ಮಳಿಗೆಗಳನ್ನು ಕರ್ನಾಟಕ ಅಬಕಾರಿ (ಭಾರತೀಯ ಮತ್ತು ವಿದೇಶಿ ಮದ್ಯಗಳ ಮಾರಾಟ) ನಿಯಮಗಳು, 1968 ರ ನಿಯಮ-3(11-ಸಿ), 8, 8(ಎ) ಹಾಗೂ ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ-5ರ ಪ್ರಕಾರ ನಿಬಂಧನೆಗಳನ್ನು ಪಾಲಿಸಿ ಮಂಜೂರು ಮಾಡಲು ಪೂರ್ವಾನುಮತಿ ನೀಡಲಾಗುವುದು.<br>ಸರ್ಕಾರದ ಆದೇಶ ಸಂಖ್ಯೆ: ಎಫ್ ಡಿ/07/ಇಎಫ್ಎಲ್/2008 ದಿನಾಂಕ: 03/07/2009 ರಲ್ಲಿ ಪ್ರತಿ ತಾಲ್ಲೂಕಿಗೆ ಕನಿಷ್ಟ 2 ಸನ್ನದುಗಳಂತೆ 352 ಸನ್ನದುಗಳು, ಜಿಲ್ಲಾ ಕೇಂದ್ರಸ್ಥಾನಕ್ಕೆ 2 ರಂತೆ 58 ಸನ್ನದುಗಳು ಹಾಗೂ ಎಂಎಸ್ಐಎಲ್ ಸಂಸ್ಥೆ ಪ್ರಾದೇಶಿಕ ಬೇಡಿಕೆ ಅಧ್ಯಯನ ಆಧರಿಸಿ ಕೋರಿಕೆ ಸಲ್ಲಿಸುವ ಸ್ಥಳಗಳಿಗೆ 53 ಸನ್ನದುಗಳಂತೆ ಒಟ್ಟು 463 ಸನ್ನದುಗಳನ್ನು ಹಂಚಿಕೆ ಮಾಡಲಾಗಿದೆ.<br>ಮುಂದುವರೆದು, ಸರ್ಕಾರದ ಆದೇಶ ಸಂಖ್ಯೆ:ಎಫ್ ಡಿ/15/ ಇಎಫ್ಎಲ್/2015, ದಿ:23-09-2016 ರಲ್ಲಿ ರಾಜ್ಯದ 220 ವಿಧಾನ ಸಭಾ ಕ್ಷೇತ್ರಗಳಿಗೆ ಪ್ರತಿ ಕ್ಷೇತ್ರಕ್ಕೆ 4 ಸನ್ನದುಗಳಂತೆ ಒಟ್ಟು 880, ಯಾದಗಿರಿ ಜಿಲ್ಲೆಯ ನಾಲ್ಕೂ ವಿಧಾನ ಸಭಾ ಕ್ಷೇತ್ರಗಳಿಗೆ ತಲಾ 5 ರಂತೆ ಒಟ್ಟು 20, ಹೀಗೆ ರಾಜ್ಯದಲ್ಲಿ ಒಟ್ಟಾರೆ 900 ಸಿಎಲ್ 11-ಸಿ ಸನ್ನದುಗಳನ್ನು ಕೆಳಕಂಡ ಷರತ್ತುಗಳನ್ನು ವಿಧಿಸಿ ಎಂ.ಎಸ್.ಐ.ಎಲ್ ಸಂಸ್ಥೆಗೆ ಮಂಜೂರಾತಿ ನೀಡಲು ಸರ್ಕಾರವು ಅನುಮತಿ ನೀಡಿರುತ್ತದೆ.<br>i. ಎಂ.ಎಸ್.ಐ.ಎಲ್ ಸಂಸ್ಥೆಯೇ ತನ್ನ ವಾಣಿಜ್ಯ ಕಾರ್ಯಸಾಧ್ಯತೆಗೆ ಅನುಗುಣವಾಗಿ ಸನ್ನದುಗಳ ಸ್ಥಳವನ್ನು ನಿಗಧಿಗೊಳಿಸುವುದು. ಎಂ.ಎಸ್.ಐ.ಎಲ್ ಸಂಸ್ಥೆಯ ಅಧಿಕಾರಿಗಳು |

| | | |
|---|---|---|
| | | ಕರ್ನಾಟಕ ಅಬಕಾರಿ ಕಾಯ್ದೆಯನ್ವಯ ಮದ್ಯದಂಗಡಿಗಳನ್ನು ತೆರೆಯುವ ನಿರ್ದಿಷ ಸ್ಥಳಗಳನ್ನು ಗುರುತಿಸುವುದು.<br>ii. ಈ ರೀತಿ ಗುರುತಿಸುವ ಸ್ಥಳಗಳು ಸರ್ಕಾರವು ತಿಳಿಸಿರುವ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲೇ ಇರಬೇಕು ಹಾಗೂ ನಿಗದಿಪಡಿಸಿರುವ ಸಂಖ್ಯೆಯ ಮಿತಿಯಲ್ಲೇ ಇರಬೇಕು.<br>iii. ಒಂದು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಿಂದ ಮತ್ತೊಂದು ವಿಧಾನಸಭಾ ಕ್ಷೇತ ವ್ಯಾಪ್ತಿಗೆ ವರ್ಗಾವಣೆ ಆಗದಂತೆ ನೋಡಿಕೊಳ್ಳತಕ್ಕದ್ದು.<br>ಸರ್ಕಾರದ ಆದೇಶ ಸಂಖ್ಯೆ: ಎಫ್ ಡಿ/08/ಇಎಫ್‌ಎಲ್/2020 ದಿನಾಂಕ: 08-09-2020 ರಲ್ಲಿ ವಿವಿಧ ವಿಧಾನಸಭಾ ಕ್ಷೇತ್ರಗಳಲ್ಲಿ ಬಾಕಿ ಉಳಿದಿರುವ 441 ಸಿಎಲ್-11ಸಿ ಕೋಟಾದಡಿಯಲ್ಲಿನ ಸನ್ನದುಗಳನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಪ್ರಾರಂಭಿಸಲು ಸರ್ಕಾರದ ಅನುಮತಿ ನೀಡಲಾಗಿದೆಯೆಂದು ನಿರ್ದೇಶಿಸಿರುತ್ತದೆ:<br>1. ಎಂ.ಎಸ್.ಐ.ಎಲ್ ಸಂಸ್ಥೆಗೆ ತನ್ನ ವಾಣಿಜ್ಯ ಕಾರ್ಯ ಸಾಧ್ಯತೆಗೆ ಅನುಗುಣವಾಗಿ ಸನ್ನದುಗಳ ಸ್ಥಳವನ್ನು ನಿಗದಿಗೊಳಿಸುವುದು. ಎಂ.ಎಸ್.ಐ.ಎಲ್ ಸಂಸ್ಥೆಯ ಅಧಿಕಾರಿಗಳು ಕರ್ನಾಟಕ ಅಬಕಾರಿ ಕಾಯ್ದೆಯನ್ವಯ ಮದ್ಯದಂಗಡಿಗಳನ್ನು ತೆರೆಯುವ ನಿರ್ದಿಷ್ಟ ಸ್ಥಳಗಳನ್ನು ಗುರುತಿಸುವುದು.<br>2. ಸಿಎಲ್-11ಸಿ ಕೋಟಾದಲ್ಲಿನ ಬಾಕಿ ಇರುವ 441 ಚಿಲ್ಲರೆ ಮದ್ಯ ಮಾರಾಟ ಸನ್ನದುಗಳ ಪೈಕಿ ಯಾವುದಾದರೂ ಸನ್ನದನ್ನು ಒಂದು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಿಂದ ಮತ್ತೊಂದು ವಿಧಾನಸಭಾ ಕ್ಷೇತ್ರ ವ್ಯಾಪ್ತಿಗೆ ವರ್ಗಾವಣೆ ಮಾಡುವುದಾದಲ್ಲಿ ಅದೇ ಜಿಲ್ಲೆಯ ಬೇರೆ ಯಾವುದಾದರೂ ಅಗತ್ಯವಿರುವ ವಿಧಾನಸಭಾ ಕ್ಷೇತ್ರಕ್ಕೆ ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ 5 ರನ್ವಯ ಆಕ್ಷೇಪಣಾ ರಹಿತ ಸ್ಥಳಕ್ಕೆ ದಿನಾಂಕ:31-12-2020 ರೊಳಗೆ ವರ್ಗಾವಣೆ ಮಾಡಿಕೊಳ್ಳತಕ್ಕದ್ದು.<br>ಎಂ.ಎಸ್.ಐ.ಎಲ್ ಸಂಸ್ಥೆಯಿಂದ ಸನ್ನದು ಸ್ಥಳಗಳನ್ನು ಗುರುತಿಸಿ ಅಬಕಾರಿ ಇಲಾಖೆಗೆ ಸಲ್ಲಿಸಿದ ನಂತರ ಅಂತಹಾ ಸನ್ನದು ಸ್ಥಳಗಳು ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ 5 ರನ್ವಯ ಆಕ್ಷೇಪಣಾ ರಹಿತ ಸ್ಥಳದಲ್ಲಿರುವಂತೆ ಹಾಗೂ ಇತರೇ ಸಂಬಂಧಿಸಿದ ನಿಯಮಗಳಿಗೆ ಪೂರಕವಾಗಿರುವಂತೆ ಸಂಬಂಧಪಟ್ಟ ಅಬಕಾರಿ ಉಪ ಆಯುಕ್ತರು ನೋಡಿಕೊಳ್ಳುವುದು. (ಆದೇಶದ ಪ್ರತಿಗಳನ್ನು ಲಗತ್ತಿಸಿದೆ) |
| ಇ) | ಬಾರ್ ಅಂಡ್ ರೆಸ್ಟೋರೆಂಟ್ ಮತ್ತು ಕ್ಲಬ್‌ಗಳು ಮಾರ್ಚ್‌ನಿಂದ ಆಗಸ್ಟ್ ಅಂತ್ಯದವರೆಗೂ ಮುಚ್ಚಲ್ಪಟ್ಟಿದ್ದು, ಪ್ರಸ್ತುತ ವಹಿವಾಟು ಇಲ್ಲದಿರುವುದರಿಂದ ಪುನರ್ ನವೀಕರಣವನ್ನು ತಾತ್ಕಾಲವಧಿಗೆ ಮುಂದುವರೆಸುವ ಬಗ್ಗೆ ಸರ್ಕಾರ ಕ್ರಮಕೈಗೊಳ್ಳುವುದೇ? (ವಿವರ ನೀಡುವುದು) | ಪತ್ರ ಸಂ: ಇಸಿಐ/60/ಜ. ಐಎಂಎಲ್/2019-20 ದಿ:02.06.2020ರಲ್ಲಿ ಸನ್ನದು ನವೀಕರಣಕ್ಕಾಗಿ ಅರ್ಜಿ ಸಲ್ಲಿಸುವ ಸಮಯದಲ್ಲಿ ಅರ್ಜಿಯೊಂದಿಗೆ ನಿಯಮಾನುಸಾರ ಅನ್ವಯಿಸುವ ಸನ್ನದು ಶುಲ್ಕ ಮತ್ತು ಹೆಚ್ಚುವರಿ ಸನ್ನದು ಶುಲ್ಕದ ಮೊತ್ತದಲ್ಲಿ ಶೇ.50ರಷ್ಟು ಮೊತ್ತವನ್ನು ಪಾವತಿಸತಕ್ಕದ್ದು ಹಾಗೂ ಉಳಿದ ಶೇ.50 ರಷ್ಟು ಸನ್ನದು ಶುಲ್ಕ ಮತ್ತು ಹೆಚ್ಚುವರಿ ಸನ್ನದು ಶುಲ್ಕದ ಮೊತ್ತವನ್ನು ದಿನಾಂಕ:31.12.2020ರೊಳಗೆ |

| | | |
|---|---|---|
| | | ಕಡ್ಡಾಯವಾಗಿ ಪಾವತಿಸಲು ಅನುವು ಮಾಡಿಕೊಡಲಾಗಿರುತ್ತದೆ. ಸನ್ನದಿನ ಅವಧಿಯು ಮುಕ್ತಾಯವಾದ ನಂತರ ಸನ್ನದನ್ನು ನವೀಕರಿಸದೆ ಮದ್ಯ ಮಾರಾಟ ಮಾಡಲು ಅನುಮತಿ ನೀಡಲು ಅವಕಾಶವಿರುವುದಿಲ್ಲವಾದ್ದರಿಂದ ಮನರ್ ನವೀಕರಣವನ್ನು ತಾತ್ಕಾಲವಧಿಗೆ ಮುಂದುವರೆಸುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |

ಆಇ 73 ಇಎಲ್‌ಕ್ಯೂ 2020

(ಹೆಚ್ ನಾಗೇಶ್)
ಅಬಕಾರಿ ಸಚಿವರು